# ತರಗತಿಯ ಹೊರಗೆ ಕಲಿಯುವುದು: ಒಂದು ನಿಜವಾದ ಜೀವನಾನುಭವ

ಜೆನೆವೀವ್ ತಲಂಗ್

ಮಕ್ಕಳು ತುಂಬ ಬುದ್ಧಿವಂತರು ಜಾಣರು ಕುತೂಹಲಿಗಳು ಮತ್ತು ಏನನ್ನೇ ಆಗಲಿ ಬಹಳ ವೇಗವಾಗಿ ಕಲಿಯಬಲ್ಲವರು. ತಮ್ಮ ಪುಸ್ತಕಗಳಿಂದ ಕಲಿಯುವುದು ಮತ್ತು ಜ್ಞಾನಾರ್ಜನೆ ಮಾಡುವುದು ಇವುಗಳಲ್ಲದೆ, ತರಗತಿಯಿಂದ ಹೊರಗೆ ಕಲಿಯುವುದು ಸಹ ನಿಗದಿಯಾದ ಪಠ್ಯಕ್ರಮದ ಮೂಲಕ ಕಲಿಯುವುದರಷ್ಟೇ ಮುಖ್ಯವಾಗಿರುತ್ತದೆ. ತರಗತಿಯಿಂದ ಹೊರಗೆ ಕಲಿಯುವುದೆಂದರೆ ನಮ್ಮ ಸುತ್ತಲಿನ ಪರಿಸರದಿಂದ ಕಲಿಯುವುದು ಎಂಬುದು ನಮಗೆ ಗೊತ್ತು ಮತ್ತು ಇದನ್ನು ನಿಜವಾದ ಜೀವನದ ಅನುಭವಗಳು ಎಂದು ಕರೆಯಬಹುದು. ತಮ್ಮ ಸುತ್ತಲೂ ಇರುವಂತಹವುಗಳಿಂದಲೇ ಮಕ್ಕಳು ಅನೇಕ ಸಂಗತಿಗಳನ್ನು ಕಲಿಯಬಹುದು. ಅದು ಅವರ ಹಿತ್ತಲಿನಲ್ಲಿರುವ ಮಣ್ಣು ಮಾತ್ರ ಆಗಿರಬಹುದು ಅಥವಾ ನದಿಯಲ್ಲಿ ಹರಿಯುವ ನೀರಾಗಿರಬಹುದು. ಶಿಕ್ಷಕರು ತರಗತಿಯೊಳಗೆ ಎಲ್ಲ ಕಲಿಕೆಯನ್ನು ನೀಡಬೇಕು ಎಂದು ನಿರೀಕ್ಷಿಸುವುದು ಕಾರ್ಯಸಾಧುವಲ್ಲ. ಆದ್ದರಿಂದಲೇ ನಮ್ಮ ಮಕ್ಕಳು ಪ್ರಕೃತಿಯಿಂದ ಕಲಿಯಲು ನೆರವಾಗುವುದು ಮತ್ತು ಅವಕಾಶ ನೀಡುವುದು ಬಹಳ ಮುಖ್ಯವಾಗುತ್ತದೆ.

ಎರಡನೇ ತರಗತಿಯಲ್ಲಿ ಓದುತ್ತಿರುವ ಏಳು ವರ್ಷ ವಯಸ್ಸಿನ ಮಗುವೊಂದು ಶಾಲೆಯ ಪಠ್ಯಪುಸ್ತಕಗಳ ಮೂಲಕ ತನ್ನ ಪರಿಸರದಲ್ಲಿರುವ ನೀರಿನ ವಿವಿಧ ಮೂಲಗಳ ಬಗ್ಗೆ ಕಲಿಯುತ್ತದೆ. ಆದರೆ ಕೆಲವೊಮ್ಮೆ ಈ ಪರಿಕಲ್ಪನೆಯ ಪ್ರಾಮುಖ್ಯವನ್ನು ಮಕ್ಕಳು ಅರ್ಥ ಮಾಡಿಕೊಳ್ಳುವಂತೆ ಮಾಡಲು ಮತ್ತು ನಾವು ಈ ವಿಷಯದ ಬಗ್ಗೆ ಏಕೆ ತಿಳಿದುಕೊಳ್ಳಬೇಕು ಎಂಬುದನ್ನು ಮನವರಿಕೆ ಮಾಡಿಕೊಡಲು ಕೆಲವೊಂದು ಬೋಧನೆಯ ಸರಳ ವಿಧಾನಗಳನ್ನು ಸೃಷ್ಟಿಸಬೇಕಾಗುತ್ತದೆ. ಮಗುವೊಂದು ಪ್ರಕೃತಿಯನ್ನು ಅನ್ವೇಷಿಸುವಂತೆ ಮಾಡಲು ಆ ಮಗುವನ್ನು ಒಂದು ಹರಿಯುವ ನದಿ ಅಥವಾ ಸಮುದ್ರದ ದಂಡೆಗೆ ಕರೆದುಕೊಂಡು ಹೋಗಿ ಆ ಜಲಮೂಲಗಳನ್ನು, ಸಸ್ಯಗಳನ್ನು, ಕಲ್ಲುಗಳನ್ನು ಮತ್ತು ಮಣ್ಣನ್ನು ಗಮನಿಸಲು ಅದಕ್ಕೆ ಅವಕಾಶ ಮಾಡಿಕೊಡುವುದು ಒಂದು ವಿಧಾನ. ಮಕ್ಕಳು ಇಂತಹ ಗಮನಿಸುವಿಕೆಗಳಿಂದ ಅನೇಕ ಸಂಗತಿಗಳನ್ನು ಕಲಿಯುತ್ತಾರೆ. ಉದಾಹರಣೆಗೆ, ನೀರನ್ನು ಶುಚಿಯಾಗಿ ಇಡುವುದು ಹೇಗೆ? ಏಕೆಂದರೆ ಅವರು ಇಲ್ಲಿ ಅದನ್ನು ಮಲಿನ ಮಾಡಬಾರದು ಮತ್ತು ತಾವು ಅದನ್ನು ಕುಡಿಯಲಾಗುವಂತೆ ಶುಚಿತ್ವವನ್ನು ಕಾಪಾಡುವುದು ಅಗತ್ಯವಾಗುತ್ತದೆ. ಒಂದು ವಿಷಯವನ್ನು ಅಧ್ಯಯನ ಮಾಡುವುದರ ಪ್ರಾಮುಖ್ಯವನ್ನು ಮಕ್ಕಳಿಗೆ ಕಲಿಸಲು ಇದು ಸರಳವಾದ ಮತ್ತು ಸುಲಭವಾದ ಮಾರ್ಗವಾಗಿರುತ್ತದೆ. ಮತ್ತು ಯಾವ ಮಗು ತಾನೇ ಅನ್ವೇಷಿಸುವುದಿಲ್ಲವೋ ಅಥವಾ ನೇರ ಅನುಭವದ ಖುಷಿಯನ್ನು ಹೊಂದಿರುವುದಿಲ್ಲವೋ ಆ ಮಗುವಿಗಿಂತ ಹೆಚ್ಚು ದೀರ್ಘಕಾಲ ಕಲಿಕೆಯನ್ನು ಇದು ಈ ವಿಧಾನದಲ್ಲಿ ಕಲಿತ ಮಗುವಿನ ಮನಸ್ಸಿನಲ್ಲಿ ಉಳಿಸುತ್ತದೆ. ಇಲ್ಲಿ ಮಕ್ಕಳು ಕೇವಲ ಆ ವಿಷಯವನ್ನು ಕಲಿಯುವುದಿಲ್ಲ ಬದಲಿಗೆ ಅವರ ಸ್ಥೂಲ ಮತ್ತು ಸೂಕ್ಷ್ಮ ಚಲನೆಯ ಕೌಶಲ್ಯಗಳನ್ನು (ಮೋಟಾರ್ ಸ್ಕಿಲ್ಸ್) ಉತ್ತಮಪಡಿಸಿಕೊಳ್ಳಲು ಅಗತ್ಯವಾದ ಭೌತಿಕ ಚಟುವಟಿಕೆಗಳನ್ನು ಕಲಿಯುತ್ತಾರೆ.

ದೈಹಿಕ ಶಿಕ್ಷಣದ ಮೂಲಕ ಚಲನ ಕೌಶಲ್ಯದ ಅಭಿವೃದ್ಧಿಯ ಬಗ್ಗೆ ಹೇಳುವಾಗ ನಾವು ಈಜು ಹೊಡೆಯುವ ಉದಾಹರಣೆಯನ್ನು ತೆಗೆದುಕೊಳ್ಳೋಣ. ನಾವೆಲ್ಲರೂ ಸಹ ಮಕ್ಕಳು ನೀರಿನಲ್ಲಿ ಆಗುವ ಆಕಸ್ಮಿಕಗಳಿಂದ ಸುರಕ್ಷಿತವಾಗಬೇಕು ಎಂದು ಬಯಸುತ್ತೇವೆ. ಆದ್ದರಿಂದ ಅವರಿಗೆ ಮನೆಯಲ್ಲಿಯೂ, ಹೊರಗಡೆಯೂ ಸುರಕ್ಷಿತತೆಯ ಬಗ್ಗೆ ಹೇಳುತ್ತಿರುತ್ತೇವೆ. ಶಾಲೆಗಳಲ್ಲಿ ಅನೇಕ ಜಾಗೃತಿ ಕಾರ್ಯಕ್ರಮಗಳನ್ನು, ವಿಪತ್ತು ನಿರ್ವಹಣಾ ಕಾರ್ಯಾಚರಣೆಗಳನ್ನು ಕಲಿಸುವ ಕಾರ್ಯಕ್ರಮಗಳನ್ನು ಮಾಡುತ್ತೇವೆ. ಕೇವಲ ವೀಕ್ಷಣೆಯಿಂದ ಕಲಿಸುವಂತಹ ಕೆಲವೊಂದು ಕಾರ್ಯಾಚರಣೆಗಳನ್ನು ತೆಗೆದುಕೊಳ್ಳಿ - ಕೇವಲ ವಿವರಣೆಯಿಂದಾಗಲೀ ಅಥವಾ ನಾವು ತೋರಿಸುವ ಕಂಪ್ಯೂಟರ್ ನಲ್ಲಿನ ಪ್ರಾತ್ಯಕ್ಷಿಕೆಯಿಂದಾಗಲೀ ಮಗು ಅದನ್ನು ಮಾಡಬಹುದೇ? ಹಾಗೆ ಮಗು ಅದನ್ನು ಸಾಧಿಸುವುದು ಅಸಾಧ್ಯ, ಆದ್ದರಿಂದ ಮಗುವನ್ನು ಹೊರಗೆ ನದಿಗೆ ಕರೆದುಕೊಂಡು ಹೋಗಿ ಅದನ್ನು ಅನ್ವೇಷಿಸಲು ನೆರವಾಗುವುದು ಉತ್ತಮ, ಅದು ಇದರಿಂದ ಬೇಗ ಕಲಿಯುತ್ತದೆ ಮತ್ತು ಅದನ್ನು ಇಷ್ಟಪಡುತ್ತದೆ ಸಹ.

ಮೇಲಿನ ತರಗತಿಗಳಲ್ಲಿ ವಿಜ್ಞಾನವನ್ನು ಕಲಿಯುವುದು ಇನ್ನಷ್ಟು ಹೆಚ್ಚು ಕಷ್ಟ. ಏಕೆಂದರೆ, ವಿಶೇಷವಾಗಿ ಕೆಲವು ಮಕ್ಕಳಿಗಂತೂ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ಹೆಚ್ಚಿನ ಏಕಾಗ್ರತೆ ಅಗತ್ಯವಾಗುತ್ತದೆ. ನನಗೆ ನನ್ನ ಅನುಭವವೇ ನೆನಪಾಗುತ್ತದೆ: ನಿಜ ಜೀವನದ ಅನುಭವವಿಲ್ಲದೆ, ಪ್ರಾಕ್ಟಿಕಲ್ಸ್ ಇಲ್ಲದೆ, ವಿಜ್ಞಾನವನ್ನು ಅರ್ಥಮಾಡಿಕೊಳ್ಳುವಲ್ಲಿ ಮತ್ತು ಅಧ್ಯಯನಮಾಡುವಲ್ಲಿ ನಾನು ಬಹಳಷ್ಟು ಸಮಸ್ಯೆಗಳನ್ನು ಎದುರಿಸಿದ್ದೆ. ಕೆಲವೊಂದು ವಿಷಯಗಳನ್ನು ತರಗತಿಯಿಂದ ಹೊರಗಡೆ ಕ್ಷೇತ್ರ ಸಂಚಾರದ ಮೂಲಕ, ವಸ್ತು ಸಂಗ್ರಹಾಲಯಗಳಿಗೆ ಭೇಟಿ ನೀಡುವುದರ ಮೂಲಕ, ವೈಜ್ಞಾನಿಕ ಸಂಸ್ಥೆಗಳಿಗೆ ಕಾರ್ಖಾನೆಗಳಿಗೆ ಹಾಗೂ ವಸ್ತು ಪ್ರದರ್ಶನಗಳಿಗೆ ಹೋಗುವುದರ ಮೂಲಕ, ಹೊಲಗದ್ದೆಗಳಲ್ಲಿ ಕೃಷಿ ಮಾಡುವುದರಿಂದ ಕಾರ್ಯಯೋಜನೆಗಳನ್ನು ಜಾರಿಗೊಳಿಸುವ ಮೂಲಕ ಚೆನ್ನಾಗಿ ಕಲಿಯಬಹುದು. ಮಕ್ಕಳಿಗೆ ನೆರವಾಗುವುದರಲ್ಲಿ ಪೋಷಕರನ್ನು ತೊಡಗಿಸಿಕೊಳ್ಳುವುದು ನನಗೆ ಹೊಳೆಯುವ ಒಂದು ಮುಖ್ಯವಾದ ಅಂಶ.

ನನ್ನ ಮಕ್ಕಳ ಶಿಕ್ಷಕರಿಂದ ನನಗೆ ಸಿಕ್ಕಿದಂತಹ ಒಂದು ಅದ್ಭುತ ಅನುಭವವೆಂದರೆ, ಮಕ್ಕಳ ಕಲಿಕೆಯ ಅಗತ್ಯತೆಯಲ್ಲಿ ಪೋಷಕರನ್ನು ತೊಡಗಿಸಿಕೊಳ್ಳುವುದು ಬಹಳ ಮುಖ್ಯವಾದದ್ದು ಎಂಬ ಸಂಗತಿಯನ್ನು ನೆನಪಿಸಿದ್ದು. ಇಲ್ಲಿ ಮಕ್ಕಳು ಮತ್ತು ಪೋಷಕರಿಬ್ಬರೂ ಒಟ್ಟಿಗೆ ಕಲಿಯುತ್ತಾರೆ. ಏಕೆಂದರೆ ಅದು ಭಾವನಾತ್ಮಕವಾದ, ಮಾನಸಿಕವಾದ ಮತ್ತು ಅದೇ ರೀತಿಯಲ್ಲಿ ಶಾರೀರಕ ಅಭಿವೃದ್ಧಿಯನ್ನು ತರುತ್ತದೆ. ಮಗು ಮತ್ತು ಪೋಷಕರ ಮಧ್ಯದ ಸಹಕಾರವನ್ನು ಆಧರಿಸಿದ ಕೆಲಸದ ವಿಧಾನವು, ಮಗುವಿಗೆ ಗುಂಪಿನಲ್ಲಿ ಕೆಲಸ ಮಾಡುವುದನ್ನು ಕಲಿಸುತ್ತದೆ, ಅದರ ಸಾಮಾಜಿಕ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುತ್ತದೆ, ಹೊಂದಿಕೊಳ್ಳುವುದನ್ನು, ಪ್ರೀತಿ, ನಂಬಿಕೆ, ಸಹಕಾರಗಳನ್ನು ಹೆಚ್ಚಿಸುತ್ತದೆ. ಮರಿಯಾ ಮಾಂಟೆಸೋರಿ ಅವರ ಪ್ರಕಾರ ಮಕ್ಕಳು ಮತ್ತು ಪೋಷಕರು ಒಟ್ಟಿಗೆ ಕೆಲಸ ಮಾಡಿದಾಗ ಪ್ರೀತಿ ಮತ್ತು ಕಾಳಜಿಯನ್ನು ಕುರಿತ ಮಗುವಿನ ಆವಶ್ಯಕತೆಯು ತಣಿಸಲ್ಪಡುತ್ತದೆ ಮತ್ತು ಇದನ್ನು ಸಾಧಿಸಲು ಇರುವ ಮಾರ್ಗಗಳಲ್ಲಿ ಒಂದೆಂದರೆ ತರಗತಿಯ ಹೊರಗೆ ಕೆಲಸ ಮಾಡುವುದು. ಕೇವಲ ಚಿತ್ರವನ್ನೋ ಅಥವಾ ಫೋಟೋ ಅನ್ನೋ ಅಂಟಿಸುವುದಾಗಲೀ ಅಥವಾ ಕಲೆ ಮತ್ತು ಕರಕುಶಲ ಕೆಲಸವಾಗಲಿ ಇದರಲ್ಲಿ ಮಗುವಿಗೆ ಸಿಕ್ಕುವ ಆನಂದವು ಬಹಳ ತೃಪ್ತಿದಾಯಕವಾದದ್ದು.

ಶಿಕ್ಷಕರ ಶಿಕ್ಷಣದ ರಾಷ್ಟ್ರೀಯ ಮಂಡಳಿಯು ಅಧ್ಯಾಪಕರು ಹೆಚ್ಚು ಮಾನವೀಯವಾಗಬೇಕು ಎಂಬುದಕ್ಕೆ ಒತ್ತು ಕೊಡುತ್ತದೆ. ಆದರೆ ದೊಡ್ಡದಾದ ಪಠ್ಯಕ್ರಮ ಮತ್ತು ವಿಪರೀತವಾದ ಕೆಲಸದ ಭಾರದಿಂದಾಗಿ ಶಿಕ್ಷಕರು ಕೆಲವೊಮ್ಮೆ ಈ ಅಂಶವನ್ನು ಉಪೇಕ್ಷಿಸುತ್ತಾರೆ. ಪಠ್ಯಕ್ರಮವನ್ನು ಮುಗಿಸಲು ಪ್ರತಿಯೊಬ್ಬ ಶಿಕ್ಷಕರು ವೇಗವಾಗಿ ಮುಂದೆ ಸಾಗುತ್ತಿರುತ್ತಾರೆ. ಇಡೀ ವರ್ಷ ತರಗತಿಯೊಳಗೆ ಪಠ್ಯಕ್ರಮವನ್ನು ಮುಗಿಸಲಿಕ್ಕಾಗಿಯೇ ಮಗ್ನರಾಗಿರುವ ಶಿಕ್ಷಕರಿಗೆ, ತರಗತಿಯಿಂದ ಹೊರಗೆ ಕಲಿಯಲಿಕ್ಕೆ ಮಕ್ಕಳಿಗೆ ನೆರವು ನೀಡಲು ಎಲ್ಲಿ ಸಮಯವಿರುತ್ತದೆ? ಆದ್ದರಿಂದ ಕಡೆಯ ಪಕ್ಷ ತಿಂಗಳಿಗೆ ಒಂದು ಬಾರಿಯಾದರೂ ಪ್ರತಿಯೊಂದು ವಿಷಯಕ್ಕೆ ಸಂಬಂಧಿಸಿದಂತೆ ಮಗುವಿಗೆ ತರಗತಿಯ ಹೊರಗೆ ಕಲಿಯಲು ಅವಕಾಶ ಸಿಗುವಂತೆ ಪಠ್ಯಕ್ರಮವನ್ನು ಯೋಜಿಸುವುದು ಅಗತ್ಯವಾಗುತ್ತದೆ.

ಕೇವಲ ಕಿರಿಯ ಪ್ರಾಥಮಿಕ ವಿದ್ಯಾರ್ಥಿಗಳಿಗಲ್ಲ, ಬದಲಿಗೆ ಮೇಲಿನ ತರಗತಿಗಳಿಗೆ ಸೇರಿದವರಿಗೆ ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ಸಹ ಅದು ಆವಶ್ಯಕ. ವಾಸ್ತವಾಂಶವೇನೆಂದರೆ ಅದು ಎಳೆಯ ವಿದ್ಯಾರ್ಥಿಗಳಿಗೆ ಬೆಳೆಯಲು ಮತ್ತು ಅಭಿವೃದ್ಧಿ ಹೊಂದಲು ನೆರವಾಗುತ್ತದೆ ಎಂಬುದು ಮಾತ್ರವಲ್ಲ, ಅದು ಹಿರಿಯ ವಿದ್ಯಾರ್ಥಿಗಳಿಗೆ ಕೂಡ ಶಕ್ತಿಯನ್ನು ತರುತ್ತದೆ ಎಂಬುದನ್ನು ನಾವು ಅಲ್ಲಗಳೆಯಲಾಗದು. ಉದಾಹರಣೆಗೆ ಮೇಲಿನ ಹಂತದ ವಿದ್ಯಾರ್ಥಿಗಳಿಗೆ ಮನೆ ಕೆಲಸವನ್ನು ಕೊಡಬೇಕಾದಾಗ ಅವರಿಗೆ ತಾವಾಗಿಯೇ ಯೋಚಿಸಲು ಮತ್ತು ವಾಸ್ತವಂಶಗಳನ್ನು ಬರೆಯಲು ಆಗುತ್ತದೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು ಆವಶ್ಯಕ. ವಿದ್ಯಾರ್ಥಿಗಳು ಪೂರೈಸುವ ಮನೆ ಕೆಲಸಗಳು ಒಂದೋ ಪುಸ್ತಕಗಳಿಂದ ನಕಲು ಮಾಡಿದ್ದಾಗಿರುತ್ತದೆ ಅಥವಾ ಸಿದ್ಧವಾಗಿ ಸಿಗುವ ಕೈಪಿಡಿಗಳಿಂದ ತೆಗೆದುಕೊಂಡವಾಗಿರುತ್ತದೆ ಎಂಬುದನ್ನು ನಾವು ಅನೇಕ ಬಾರಿ ಗಮನಿಸುತ್ತೇವೆ. ಪ್ರಾಯಃ ಇದು ಏಕೆ ಹೀಗಾಗುತ್ತದೆ ಎಂದರೆ ಶಿಕ್ಷಕರಾದ ನಾವು ವಿದ್ಯಾರ್ಥಿಗಳಿಗೆ ಅವರು ತಮ್ಮ ನೇರವಾದ ಅನುಭವಗಳನ್ನು ಬರೆಯಬೇಕೆಂದು ಹೇಳಿರುವುದಿಲ್ಲ. ಅದು ಎಷ್ಟೇ ಕಷ್ಟವಾದರೂ ನಾವು ಏನು ಮಾಡಬಹುದೆಂದರೆ ಸಂದರ್ಶನಗಳನ್ನು, ಕ್ಷೇತ್ರ ಸಂಚಾರಗಳನ್ನು, ಪ್ರಯೋಗಗಳನ್ನು, ವಿಚಾರ ಸಂಕಿರಣಗಳನ್ನು ಅಥವಾ ಸಮ್ಮೇಳನಗಳನ್ನು ಸಂಘಟಿಸುವುದು.

ಉದಾಹರಣೆಗೆ ಸಂವಿಧಾನದ ಬಗ್ಗೆ ಬರೆಯುವ ಕೆಲಸವನ್ನು ಕೊಟ್ಟರೆ ಆಗ ಪುಸ್ತಕಗಳನ್ನು ನೋಡಿ ಬರೆಯಲಾಗುತ್ತದೆ. ಆದರೆ ಇದರ ಬದಲಿಗೆ ಶಿಕ್ಷಕರು ವಿದ್ಯಾರ್ಥಿಗಳಿಗೆ ತರಗತಿಯಿಂದ ಹೊರಗೆ ಕಲಿಯಲು ಅವಕಾಶ ಮಾಡಿಕೊಡುತ್ತಾ ನ್ಯಾಯಾಲಯಕ್ಕೆ,

ಸಂಸತ್ತಿಗೆ ಕರೆದುಕೊಂಡು ಹೋದರೆ ಅಥವಾ ಅಧಿಕಾರಿಗಳು, ಶಾಸಕರು ಇವರೊಂದಿಗೆ ಸಂದರ್ಶನವನ್ನು ಏರ್ಪಡಿಸಿದರೆ ಅಥವಾ ಚುನಾವಣೆಯ ಸಂದರ್ಭದಲ್ಲಿ ವಯಸ್ಸಾದವರು, ವಿಶೇಷ ಆವಶ್ಯಕತೆ ಇರುವ ಜನರು ಮುಂತಾದವರಿಗೆ ನೆರವು ನೀಡುವುದರಲ್ಲಿ ತೊಡಗಿಸಿಕೊಂಡರೆ ಅಥವಾ ಭಿತ್ತಿಪತ್ರವನ್ನು ಅಂಟಿಸುವುದಕ್ಕೆ ಕರೆದುಕೊಂಡು ಹೋದರೆ ಆಗ ಅವರಿಗೆ ಬರೆಯಲಿಕ್ಕೆ ಒಂದಷ್ಟು ಸ್ವಂತ ಅನುಭವಗಳಿರುತ್ತವೆ. ಅವರನ್ನು ಪಂಚಾಯಿತಿ ಅಥವಾ ಸ್ಥಳೀಯ ಸಮುದಾಯದ ಕೆಲಸದಲ್ಲಿ ತೊಡಗಿಸಿದರೆ, ಅವರೊಂದಿಗೆ ರಾಷ್ಟ್ರೀಯ ದಿನವೊಂದರ ಬಗ್ಗೆ ಮಾತನಾಡಿದರೆ ಮತ್ತು ಅದು ಸಂವಿಧಾನದೊಂದಿಗೆ ಹೇಗೆ ಸಂಬಂಧಿತವಾಗಿದೆ ಎಂಬುದನ್ನು ತಿಳಿಸಿದರೆ ಅವರಿಗೆ ನೆರವಾಗಬಹುದು. ನೆನಪಿನಲ್ಲಿರಿಸಿಕೊಳ್ಳಲು ಕಷ್ಟವಾಗುವಂತಹ ಉಪನ್ಯಾಸದ ತರಗತಿಗಳಿಗಿಂತ ನೇರ ಕಲಿಕೆಯು ಉತ್ತಮ.

ಇನ್ನೊಂದು ಉದಾಹರಣೆಯೆಂದರೆ ಒಳಗೊಳ್ಳುವ ಶಿಕ್ಷಣ, ವಿಶೇಷ ಚೇತನರ ಶಿಕ್ಷಣ, ಮತ್ತು ವಿಶೇಷ ಶಿಕ್ಷಣ ಇವುಗಳ ಕಾರ್ಯಕ್ಷೇತ್ರ. 18 ರಿಂದ 27 ವರ್ಷ ವಯಸ್ಸಾಗಿರುವ, ನಮ್ಮ ಎಲ್ಲ ಸೇವಾ ಪೂರ್ವ ತರಬೇತಿ ಪಡೆದುಕೊಳ್ಳುವವರು ಕೆಲವೊಂದು ಮುಖ್ಯವಾದ ವಿಷಯಗಳ ಬಗ್ಗೆ ತಿಳಿವಳಿಕೆಯನ್ನು ಹೊಂದಿರುವುದಿಲ್ಲ. ಏಕೆಂದರೆ ಅವರಿಗೆ ನೇರವಾದ ಅನುಭವವಿಲ್ಲ. ಅವರ ಕಲಿಕೆಗೆ ನೆರವಾಗಲು ಇರುವಂತಹ ಕೆಲವೊಂದು ಮಾರ್ಗಗಳೆಂದರೆ ಅವರನ್ನು ತರಗತಿಗಳಿಂದ ಹೊರಗೆ ಕರೆದುಕೊಂಡು ಹೋಗುವುದು, ವಿಶೇಷವಾದ ಮತ್ತು ಒಳಗೊಳ್ಳುವಂತಹ ವಿಭಿನ್ನ ರೀತಿಯ ಶಾಲೆಗಳು ಮತ್ತು ಸಂಸ್ಥೆಗಳಿಗೆ ಭೇಟಿ ನೀಡುವುದು, ವಿಶೇಷ ಆವಶ್ಯಕತೆಯುಳ್ಳ ಮಕ್ಕಳೊಂದಿಗೆ ಮುಖಾಮುಖಿಯಾಗುವುದು ಇತ್ಯಾದಿ. ಹೀಗಾಗಿ ತರಗತಿಯಿಂದ ಹೊರಗೆ ಕಲಿಯುವುದು ವಯಸ್ಕರ ವಿದ್ಯಾರ್ಥಿಗಳಿಗೂ ಮತ್ತು ಶಿಕ್ಷಕರಿಗೆ ಬೋಧಕರಾಗಿರುವವರಿಗೂ ಸಹ ಮುಖ್ಯವೇ. ಏಕೆಂದರೆ ಏನನ್ನೇ ಕಲಿಸುವುದಕ್ಕೆ ಮೊದಲು ನಾವು ಬೋಧನೆ ಮತ್ತು ಕಲಿಕೆಗೆ ಆನಂದವನ್ನು ತುಂಬಲು, ಸಹಜವಾಗಿ ಅದನ್ನು ಅನುಭವಿಸಬೇಕು.

ನಾನಿಲ್ಲಿ ಏನನ್ನೇ ಬರೆದಿರಲಿ, ಅದು ನನ್ನ ಅನುಭವದಿಂದ ಬಂದಿರುವಂಥದ್ದು: ಮೊದಲಿಗೆ ವಿದ್ಯಾರ್ಥಿಯಾಗಿ ಅನಂತರ ತಾಯಿಯಾಗಿ, ಶಿಕ್ಷಕಿಯಾಗಿ ಮತ್ತು ಈಗ ಶಿಕ್ಷಕರ ಬೋಧಕಳಾಗಿ ಪಡೆದುಕೊಂಡಿರುವಂಥದ್ದು. ಯಾವುದೇ ಎರಡು ಮಕ್ಕಳು ಅವರು ಅವಳಿ ಮಕ್ಕಳೇ ಆಗಿರಲಿ, ಅವರು ಒಂದೇ ತೆರನಾಗಿ ಇರುವುದಿಲ್ಲ. ನಮಗೆ ಪ್ರತಿಯೊಬ್ಬರಿಗೂ ಒಂದು ಅನನ್ಯವಾದ ಕಲಿಕೆಯ ಮಾರ್ಗವಿರುತ್ತದೆ ಆದರೆ ಅದೇ ಸಮಯದಲ್ಲಿ ನಾವೆಲ್ಲರೂ ಒಂದೇ ಪರಿಸರದಲ್ಲಿ ಬದುಕಿರುತ್ತೇವೆ ಅದೇ ಗಾಳಿಯನ್ನು ಉಸಿರಾಡುತ್ತೇವೆ. ಆದ್ದರಿಂದ ನಾವೆಲ್ಲರೂ ತರಗತಿಯ ಹೊರಗಿನ ಸಹಜ ಪರಿಸರದಲ್ಲಿ ಉತ್ತಮವಾಗಿ ಕಲಿಯುತ್ತೇವೆ. ಮಾಡುವುದರಿಂದ ಕಲಿಯುವುದು, ನೋಡುವುದರಿಂದ ಕಲಿಯುವುದು, ಬದುಕಿನ ವಾಸ್ತವ ಪರಿಸ್ಥಿತಿಯಿಂದ ಏನನ್ನಾದರೂ ಕಲಿಯುವುದು ಇವು ಅತ್ಯುತ್ತಮ. ಏಕೆಂದರೆ ಅದು ಮಗುವಿಗೆ ಸಂತಸವನ್ನು, ಅಭಿವೃದ್ಧಿಯನ್ನು ತರುತ್ತದೆ.